# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಎಂ. ಎ ಗೋಪಾಲಸ್ವಾಮಿ
ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 166
ಉತ್ತರಿಸಬೇಕಾದ ದಿನಾಂಕ : 22.09.2020

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹಾಸನ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ ಮತ್ತು ಇದರ ಅಧೀನದಲ್ಲಿರುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ರೈತರಿಗೆ ಸಾಲ ವಿತರಣೆ ಮಾಡುವಾಗ ಸರ್ಕಾರದ ಮಾರ್ಗಸೂಚಿಗಳನ್ನು ಪಾಲನೆ ಮಾಡದೆ ತಾರತಮ್ಯ ನೀತಿ ಅನುಸರಿಸುತ್ತಿರುವುದರಿಂದ ರೈತರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇಂತಹ ಎಷ್ಟು ಪ್ರಕರಣಗಳು ಬೆಳಕಿಗೆ ಬಂದಿವೆ; ಇಂತಹ ಪ್ರಕರಣಗಳಲ್ಲಿ ಭಾಗಿಯಾಗಿರುವವರ ವಿರುದ್ಧ ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ; (ಪ್ರಕರಣವಾರು ಮಾಹಿತಿ ನೀಡುವುದು) | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ.<br>ಹಾಸನ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನೀಡಿರುವ ವರದಿಯನ್ವಯ, ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ರೈತರಿಗೆ ಸಾಲ ವಿತರಣೆ ಮಾಡುವಾಗ ಸರ್ಕಾರದ ಮಾರ್ಗಸೂಚಿಗಳನ್ನು ಪಾಲಿಸುತ್ತಿವೆ. ಚನ್ನರಾಯಪಟ್ಟಣ ತಾಲ್ಲೂಕಿನ ಸಾತೇನಹಳ್ಳಿ ಪ್ಯಾಕ್ಸ್‌ನಲ್ಲಿ ರಂಗೇಗೌಡ ಬಿನ್ ಚಿಕ್ಕದ್ಯಾವೇಗೌಡ ತರಬೇಕನಹಳ್ಳಿ, ಮಳಲೀಗೌಡ ಬಿನ್ ಕೃಷ್ಣೇಗೌಡ ತರಚೀಕನಹಳ್ಳಿ ಮತ್ತು ಮಾಳಿಗೇಗೌಡ ಉರ್ಫ್ ಜಯರಾಮು ಬಿನ್ ಚಿಕ್ಕೆಗೌಡ ಇವರುಗಳಿಗೆ ಸಾಲ ನೀಡುವ ಸಂದರ್ಭದಲ್ಲಿ ಬೇರೆ ಬ್ಯಾಂಕಿನ ಬೇಬಾಕಿ ಪತ್ರ (ಎಸ್.ಬಿ.ಐ ಬ್ಯಾಂಕು) ನೀಡಿರುವುದಿಲ್ಲ. ಹಾಗಾಗಿ ಇವರಿಗೆ ಸಾಲ ನೀಡಿರುವುದಿಲ್ಲ. ತದನಂತರ ಎಸ್.ಬಿ.ಐ ಬ್ಯಾಂಕಿನ ಬೇಬಾಕಿ ಪತ್ರ ನೀಡಿರುತ್ತಾರೆ. ಮುಂದಿನ ದಿನಗಳಲ್ಲಿ ಸಾಲ ನೀಡಲಾಗುವುದೆಂದು ಮುಖ್ಯಕಾರ್ಯನಿರ್ವಹಣಾಧಿಕಾರಿ ಸಾತೇನಹಳ್ಳಿ ಪ್ಯಾಕ್ಸ್ ಚನ್ನರಾಯಪಟ್ಟಣ ತಾಲ್ಲೂಕು ಇವರು ದೃಢೀಕರಣ ನೀಡಿರುತ್ತಾರೆ. ಈ ಮೇಲಿನ ಒಂದು ಪ್ಯಾಕ್ಸ್ ಹೊರತುಪಡಿಸಿ ಜಿಲ್ಲೆಯಲ್ಲಿ ಇನ್ನಾವುದೇ ಪ್ಯಾಕ್ಸ್‌ಗಳಲ್ಲಿ ಸಾಲ ವಿತರಣೆಯಲ್ಲಿ ತಾರತಮ್ಯದ ಬಗ್ಗೆ ಸದಸ್ಯರಿಂದ ದೂರುಗಳು ಬಂದಿರುವುದಿಲ್ಲವೆಂದು ಹಾಗೂ ಬ್ಯಾಂಕಿನಲ್ಲಿ ಸಾಲ ವಿತರಣೆ ಮಾಡುವಾಗ ಯಾವುದೇ ತಾರತಮ್ಯ ಮಾಡಿರುವುದಿಲ್ಲ ಮತ್ತು ಅಂತಹ ಯಾವುದೇ ದೂರುಗಳು ಬ್ಯಾಂಕಿಗೆ ಸ್ವೀಕೃತಗೊಂಡಿರುವುದಿಲ್ಲವೆಂದು ಡಿಸಿಸಿ, ಬ್ಯಾಂಕ್ ಹಾಸನ ಇದರ ಮುಖ್ಯ ಕಾರ್ಯನಿರ್ವಹಣಾಧಿಕಾರಿ ದೃಢೀಕರಣ ನೀಡಿರುತ್ತಾರೆ.<br>ಅದಾಗ್ಯೂ, ರೈತರಿಗೆ ಸಾಲ ಸೌಲಭ್ಯ ದೊರಕುವ ನಿಟ್ಟಿನಲ್ಲಿ ಯಾವುದೇ ತಾರತಮ್ಯ ನೀತಿ ಅನುಸರಿಸದೇ ಸಾಲ ವಿತರಿಸಲು ಎಲ್ಲಾ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್‌ಗಳಿಗೆ ನಿರ್ದೇಶನ ನೀಡಲಾಗಿದೆ. |
| ಆ) | ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ ಮತ್ತು ಇದರ ಅಧೀನದಲ್ಲಿರುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಂದ ಯಾವ ಯಾವ ರೀತಿಯ ಸಾಲಗಳನ್ನು ರೈತರಿಗೆ ವಿತರಿಸಲಾಗುತ್ತಿದೆ; ಈ ಸಾಲಗಳನ್ನು ನೀಡಲು ಅನುಸರಿಸುತ್ತಿರುವ | ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ಮತ್ತು ಇದರ ಅಧೀನದಲ್ಲಿರುವ ಪ್ಯಾಕ್ಸ್‌ಗಳ ಮೂಲಕ ರೈತರಿಗೆ ಕೆಳಕಂಡ ಮಾನದಂಡಗಳನ್ನು ಅನುಸರಿಸಿ ಸಾಲ ವಿತರಣೆ ಮಾಡಲಾಗುತ್ತಿದೆ.<br>**1) ಕುಟುಂಬಕ್ಕೆ ರೂ. 3.00 ಲಕ್ಷಗಳವರೆಗೆ ಶೂನ್ಯ ಬಡ್ಡಿ ದರದಲ್ಲಿ ಅಲ್ಪಾವಧಿ ಬೆಳೆ ಸಾಲ ಮತ್ತು ಪಶುಸಂಗೋಪನೆ/ಮೀನುಗಾರಿಕೆ ಉದ್ದೇಶಗಳಿಗೆ ದುಡಿಯುವ ಬಂಡವಾಳವಾಗಿ ರೂ.2.00 ಲಕ್ಷಗಳವರೆಗೆ ಶೂನ್ಯ ಬಡ್ಡಿದರದ ಸಾಲದ ಯೋಜನೆ** |

| | | |
|---|---|---|
| | ಮಾನದಂಡಗಳೇನು: ಸಾಲ ವಿತರಣೆಯಲ್ಲಿ ಆಗುತ್ತಿರುವ ತಾರತಮ್ಯ ನಿವಾರಣೆಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು: (ಸಂಪೂರ್ಣ ಮಾಹಿತಿ ನೀಡುವುದು) | • ಈ ಯೋಜನೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಪಿಕಾರ್ಡ್ ಬ್ಯಾಂಕ್ ಅಥವಾ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳಲ್ಲಿ ರೈತನು ಪಡೆದ ಬೆಳೆ ಸಾಲ/ ಹೈನುಗಾರಿಕೆ/ಮೀನುಗಾರಿಕೆ ಸಾಲಗಳಿಗೆ ಅನ್ವಯವಾಗುತ್ತದೆ.<br>• ಈ ಯೋಜನೆಯು ಒಬ್ಬ ಫಲಾನುಭವಿಗೆ ಗರಿಷ್ಟ ರೂ.2.00 ಲಕ್ಷಗಳಿಗೆ ನೀಡಿದ ಸಾಲಗಳಿಗೆ ಮಾತ್ರ ಅನ್ವಯವಾಗುತ್ತದೆ. ಒಂದು ಕುಟುಂಬಕ್ಕೆ ಬೆಳೆ ಸಾಲ, ಪಶುಸಂಗೋಪನೆ ಮತ್ತು ಮೀನುಗಾರಿಕೆ ದುಡಿಯುವ ಬಂಡವಾಳದ ಸಾಲ ಒಟ್ಟು ಗೂಡಿಸಿ ರೂ.3.00 ಲಕ್ಷಗಳಿಗೆ ಮೀರತಕ್ಕದ್ದಲ್ಲ.<br>• ರೈತನು ರೂ.20,000/–ಗಳ ವೇತನ/ಪಿಂಚಣಿ ಪಡೆಯುತ್ತಿದ್ದರೆ ಅಥವಾ ಆದಾಯ ತೆರಿಗೆ ಪಾವತಿದಾರರಾಗಿದ್ದಲ್ಲಿ ಬಡ್ಡಿ ಸಹಾಯಧನ ಲಭಿಸುವುದಿಲ್ಲ.<br>• ಬಡ್ಡಿ ಸಹಾಯಧನ ಜಿಲ್ಲಾ ಮಟ್ಟದ ತಾಂತ್ರಿಕ ಸಮಿತಿ ನಿಗದಿಪಡಿಸಿದ ಸ್ಕೇಲ್ ಆಫ್ ಫೈನಾನ್ಸ್‌ಗೆ ಮಾತ್ರ ಲಭಿಸುತ್ತದೆ.<br>• ರೈತನು ಸಂಘವು ನಿಗದಿಪಡಿಸಿದ ಗಡುವಿನ ದಿನಾಂಕದೊಳಗೆ ಅಸಲು ಮರುಪಾವತಿಸಬೇಕು<br><br>**2) ಕುಟುಂಬಕ್ಕೆ 10.00 ಲಕ್ಷಗಳವರೆಗೆ ಮಧ್ಯಮಾವಧಿ/ದೀರ್ಘಾವಧಿ ಕೃಷಿ ಸಾಲಗಳನ್ನು ಶೇಕಡ 3 ರ ಬಡ್ಡಿ ದರದಲ್ಲಿ ವಿತರಿಸುವ ಯೋಜನೆ.**<br><br>• ಈ ಯೋಜನೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಪಿಕಾರ್ಡ್ ಬ್ಯಾಂಕ್ ಅಥವಾ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳಲ್ಲಿ ರೈತನು ಪಡೆದ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಹಾಗೂ ಕೃಷಿ ಸಂಬಂಧಿತ ಸಾಲಗಳಿಗೆ ಅನ್ವಯವಾಗುತ್ತದೆ.<br>• ನಬಾರ್ಡ್ ಗುರುತಿಸಿದ ಕೃಷಿ / ಕೃಷಿ ಸಂಬಂಧಿತ ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳ ಪೈಕಿ ಲಘು ನೀರಾವರಿ, ಭೂ ಅಭಿವೃದ್ಧಿ, ಕೃಷಿ ಯಾಂತ್ರೀಕರಣ, ಪ್ಲಾಂಟೇಷನ್ ಹಾಗೂ ತೋಟಗಾರಿಕೆ ಅಭಿವೃದ್ಧಿ, ಸಾವಯವ ಕೃಷಿ, ಪಶುಸಂಗೋಪನೆ ಹಾಗೂ ಹೈನುಗಾರಿಕೆ, ಮೀನು ಕೃಷಿ, ರೇಷ್ಮೆ ಕೃಷಿ, ಜೇನು ಸಾಕಾಣಿಕೆ ಉದ್ದೇಶಗಳಿಗೆ ರೈತರಿಗೆ ನೀಡಲಾಗುವ ಸಾಲಗಳಿಗೆ ಮಾತ್ರ ಅನ್ವಯವಾಗುತ್ತದೆ.<br>• ದ್ವಿಚಕ್ರ ವಾಹನ, ಜೀಪು, ಪಿಕಪ್ ವ್ಯಾನ್ ಹಾಗೂ ಕೃಷಿ ಸಾಗಾಣಿಕೆಗೆ ಬಳಸುವ ವಾಹನ ಸಾಲಗಳಿಗೆ, ತೋಟದ ಮನೆ, ಗ್ರಾಮೀಣ ಗೋದಾಮುಗಳಿಗೆ, ದ್ವಿತೀಯ ಸಂಸ್ಕರಣೆ, ಕೃಷಿ ಉತ್ಪನ್ನಗಳ ಮೌಲ್ಯವರ್ಧನೆ/ಆಹಾರ ಸಂಸ್ಕರಣೆ, ಕೃಷಿ ಕ್ಲಿನಿಕ್‌ಗೆ ನೀಡುವ ಸಾಲಗಳಿಗೆ ಈ ಯೋಜನೆ ಅನ್ವಯವಾಗುವುದಿಲ್ಲ |
| | | • ಈ ಯೋಜನೆಯು ಒಂದು ಕುಟುಂಬಕ್ಕೆ ರೂ.10.00 ಲಕ್ಷಗಳ ವರೆಗಿನ ಸಾಲಗಳಿಗೆ ಮಾತ್ರ ಅನ್ವಯವಾಗುತ್ತದೆ. |

| | | |
|---|---|---|
| | | • ರೈತನು ಸಂಘವು ನಿಗದಿಪಡಿಸಿದ ಗಡುವಿನ ದಿನಾಂಕದೊಳಗೆ ಅಸಲು ಮತ್ತು ಶೇ.3 ರ ಬಡ್ಡಿ ದರದಲ್ಲಿ ಮರುಪಾವತಿಸಬೇಕು.<br>ಸಾಲ ವಿತರಣೆಯಲ್ಲಿ ಬ್ಯಾಂಕಿನಲ್ಲಿ ಯಾವುದೇ ತಾರತಮ್ಯ ಮಾಡಿರುವುದಿಲ್ಲ. |
| ಇ) | ಹಾಸನ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ ಮತ್ತು ಇದರ ಅಧೀನದಲ್ಲಿರುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಕಳೆದ 3 ವರ್ಷಗಳಲ್ಲಿ ವಿವಿಧ ಯೋಜನೆಗಳಡಿ ವಿತರಣೆ ಮಾಡಿರುವ ಸಾಲದ ಮೊತ್ತವೆಷ್ಟು? (ಹೋಬಳಿವಾರು ಮತ್ತು ತಾಲ್ಲೂಕುವಾರು ಮಾಹಿತಿ ನೀಡುವುದು) | ಹಾಸನ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ ಮತ್ತು ಇದರ ಅಧೀನದಲ್ಲಿರುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಕಳೆದ 3 ವರ್ಷಗಳಲ್ಲಿ ವಿವಿಧ ಯೋಜನೆಗಳಡಿ ವಿತರಣೆ ಮಾಡಿರುವ ಸಾಲದ ಮೊತ್ತದ ತಾಲ್ಲೂಕುವಾರು, ಹೋಬಳಿವಾರು ಮಾಹಿತಿಯನ್ನು **ಅನುಬಂಧದಲ್ಲಿ** ಲಗತ್ತಿಸಿದೆ. |

**ಸಂಖ್ಯೆ: ಸಿಒ 337 ಸಿಎಲ್‌ಎಸ್ 2020**

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು

## ಹಾಸನ ಜಿಲ್ಲೆ

| ತಾಲ್ಲೂಕು | ಹೋಬಳಿ | ಪ್ಯಾಕ್ಸ್‌ಗಳ ಸಂಖ್ಯೆ | ಬೆಳೆ ಸಾಲ | | | | | | | | ಮಧ್ಯಮಾವಧಿ ಸಾಲ | | | | | | | | ಪಶುಸಂಗೋಪನೆ ಸಾಲ | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | | 2017-18 | | 2018-19 | | 2019-20 | | 2020-21 ಆಗಸ್ಟ್ ಅಂತ್ಯಕ್ಕೆ | | 2017-18 | | 2018-19 | | 2019-20 | | 2020-21 ಆಗಸ್ಟ್ ಅಂತ್ಯಕ್ಕೆ | | 2017-18 | | 2018-19 | | 2019-20 | | 2020-21 ಆಗಸ್ಟ್ ಅಂತ್ಯಕ್ಕೆ | |
| | | | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ಆಲೂರು | ಕಸಬಾ | 3 | 708 | 304.76 | 517 | 241.33 | 995 | 420.08 | 180 | 88.14 | 0 | 0 | 0 | 0 | 0 | 0 | 13 | 93 | | | | | | | 510 | 51.00 |
| ಆಲೂರು | ಪಾಳ್ಯ | 5 | 2817 | 1153.76 | 3096 | 1208.1 | 3517 | 1665.69 | 470 | 302.98 | 0 | 0 | 0 | 0 | 1 | 3 | 7 | 44.1 | | | | | | | 291 | 29.10 |
| ಆಲೂರು | ಕುಂದೂರು | 3 | 1080 | 443.57 | 1016 | 399.77 | 1202 | 616.88 | 210 | 64.1 | 0 | 0 | 0 | 0 | 0 | 0 | 3 | 25.5 | | | | | | | 351 | 35.10 |
| ಆಲೂರು | ಕ.ಹೊಸಕೋಟೆ | 2 | 705 | 384.06 | 738 | 396.69 | 995 | 622.08 | 365 | 176.15 | 0 | 0 | 0 | 0 | 1 | 10.00 | 2 | 17 | | | | | | | 111 | 11.10 |
| | ಒಟ್ಟು | 13 | 5310 | 2286.15 | 5367 | 2245.89 | 6709 | 3324.73 | 1225 | 631.37 | 0 | 0 | 0 | 0 | 2 | 13.00 | 25 | 179.6 | | | | | | | 1263 | 126.30 |
| ಅರಕಲಗೂಡು | ಕಸಬಾ | 2 | 1781 | 903.20 | 1695 | 899.04 | 1700 | 961.10 | 368 | 124.58 | 0 | 0 | 1 | 5.00 | 2 | 12.00 | 2 | 15.00 | 0 | 0 | 0 | 0 | 0 | 0 | 663 | 66.30 |
| ಅರಕಲಗೂಡು | ದೊಡ್ಡಮಗ್ಗೆ | 6 | 1512 | 699.38 | 1998 | 865.10 | 2049 | 1052.24 | 1094 | 415.42 | 0 | 0 | 0 | 0.00 | 0 | 0.00 | 0 | 0.00 | 0 | 0 | 0 | 0 | 0 | 0 | 700 | 70.00 |
| ಅರಕಲಗೂಡು | ಮಲ್ಲಿಪಟ್ಟಣ | 3 | 1633 | 903.00 | 1402 | 808.13 | 1748 | 1026.15 | 602 | 225.43 | 0 | 0 | 0 | 0.00 | 0 | 0.00 | 0 | 0.00 | 0 | 0 | 0 | 0 | 0 | 0 | 350 | 35.00 |
| ಅರಕಲಗೂಡು | ಕೊಣನೂರು | 5 | 1545 | 817.24 | 1589 | 747.41 | 1593 | 841.55 | 334 | 125.15 | 0 | 0 | 0 | 0.00 | 3 | 22.50 | 0 | 0.00 | 0 | 0 | 0 | 0 | 0 | 0 | 215 | 21.50 |
| ಅರಕಲಗೂಡು | ರಾಮನಾಥಪುರ | 6 | 1965 | 711.30 | 2416 | 853.62 | 2263 | 918.89 | 862 | 370.82 | 0 | 0 | 0 | 0.00 | 0 | 0.00 | 1 | 7.00 | 0 | 0 | 0 | 0 | 0 | 0 | 0 | 0.00 |
| | ಒಟ್ಟು | 22 | 8436 | 4034.12 | 9100 | 4173.30 | 9353 | 4799.93 | 3260 | 1261.40 | 0 | 0.00 | 1 | 5.00 | 5 | 34.50 | 3 | 22.00 | 0 | 0 | 0 | 0 | 0 | 0 | 1928 | 192.80 |
| ಅರಸೀಕೆರೆ | ಕಣಕಟ್ಟೆ | 9 | 4237 | 1519.74 | 4491 | 2284.23 | 4888 | 1993.81 | 1683 | 476.89 | | | | | | | | | | | | | | | 200 | 20.00 |
| ಅರಸೀಕೆರೆ | ಬಾಣಾವರ | 5 | 2539 | 1138.84 | 2307 | 1020.77 | 2713 | 1146.73 | 1062 | 222.50 | | | | | 2 | 10.00 | 3 | 20.00 | | | | | | | 852 | 85.20 |
| ಅರಸೀಕೆರೆ | ಕಸಬಾ | 6 | 2267 | 833.18 | 2746 | 986.42 | 3689 | 1662.67 | 1695 | 383.18 | | | | | 6 | 30.00 | 1 | 3.00 | | | | | | | 1847 | 184.70 |
| ಅರಸೀಕೆರೆ | ಗಂಡಸಿ | 7 | 3749 | 1636.65 | 5421 | 2040.42 | 6478 | 2632.81 | 1694 | 437.98 | | | | | | | | | | | | | | | 732 | 73.20 |
| ಅರಸೀಕೆರೆ | ಜಾವಗಲ್ | 6 | 3498 | 1480.85 | 3929 | 1651.91 | 3604 | 1732.75 | 1210 | 409.59 | | | | | 2 | 13.50 | 12 | 91.50 | | | | | | | 358 | 35.80 |
| | ಒಟ್ಟು | 33 | 16290 | 6609.26 | 18894 | 7983.75 | 21372 | 9168.77 | 7344 | 1930.14 | | | | | 10 | 53.50 | 16 | 114.50 | | | | | | | 3989 | 398.90 |
| ಬೇಲೂರು | ಕಸಬಾ | 9 | 3423 | 1340.68 | 2229 | 1137.22 | 2660 | 1319.94 | 295 | 147.00 | | | | | | | 2 | 14.00 | | | | | | | 796 | 79.60 |
| ಬೇಲೂರು | ಹಳೇಬೀಡು | 7 | 3522 | 1421.68 | 4000 | 1544.55 | 4678 | 2264.17 | 125 | 60.25 | | | | | 9 | 57.00 | 6 | 19.00 | | | | | | | 1061 | 106.10 |
| ಬೇಲೂರು | ಅರೇಹಳ್ಳಿ | 7 | 2015 | 1186.29 | 1836 | 1190.86 | 2186 | 1361.22 | 213 | 128.20 | | | 1 | 7.00 | 1 | 5.00 | 5 | 23.00 | | | | | | | 21 | 2.10 |
| ಬೇಲೂರು | ಬಿಕ್ಕೋಡು | 4 | 1518 | 642.24 | 1234 | 554.63 | 1655 | 817.27 | 339 | 169.20 | | | | | 5 | 36.00 | 8 | 42.00 | | | | | | | 279 | 27.90 |
| ಬೇಲೂರು | ಮಾದಿಹಳ್ಳಿ | 2 | 1706 | 759.33 | 1619 | 775.89 | 1635 | 1053.8 | 130 | 65.10 | | | | | 2 | 13.00 | 2 | 9.00 | | | | | | | 214 | 21.40 |
| | ಒಟ್ಟು | 29 | 12184 | 5350.22 | 10918 | 5203.15 | 12814 | 6816.4 | 1102 | 569.75 | 0 | 0 | 1 | 7 | 17 | 111.00 | 23 | 107.00 | | | | | | | 2371 | 237.10 |
| ಚನ್ನರಾಯಪಟ್ಟಣ | ದಂಡಿಗನಹಳ್ಳಿ | 6 | 5888 | 2459.29 | 6859 | 2759.46 | 7148 | 3225.09 | 601 | 273.16 | 4 | 17.10 | 3 | 11.75 | 2 | 10.95 | 0 | 0.00 | 0 | 0 | 0 | 0 | 0 | 0 | 0 | 0.00 |
| ಚನ್ನರಾಯಪಟ್ಟಣ | ಶ್ರವಣಬೆಳಗೊಳ | 7 | 7402 | 3940.90 | 7087 | 3616.11 | 7753 | 4592.38 | 592 | 291.62 | 0 | 0.00 | 0 | 0.00 | 0 | 0.00 | 0 | 0.00 | 0 | 0 | 0 | 0 | 0 | 0 | 159 | 15.90 |
| ಚನ್ನರಾಯಪಟ್ಟಣ | ಕಸಬಾ | 7 | 6244 | 3042.70 | 6290 | 3109.75 | 7168 | 3857.87 | 863 | 373.72 | 0 | 0.00 | 2 | 8.70 | 2 | 15.00 | 2 | 6.50 | 0 | 0 | 0 | 0 | 0 | 0 | 821 | 82.10 |
| ಚನ್ನರಾಯಪಟ್ಟಣ | ಹಿರೀಸಾವೆ | 6 | 5984 | 2801.63 | 5468 | 2668.28 | 6056 | 3175.72 | 1339 | 616.90 | 0 | 0.00 | 0 | 0.00 | 2 | 11.00 | 0 | 0.00 | 0 | 0 | 0 | 0 | 0 | 0 | 620 | 62.00 |
| ಚನ್ನರಾಯಪಟ್ಟಣ | ನುಗ್ಗೇಹಳ್ಳಿ | 5 | 4650 | 2266.04 | 4548 | 2031.81 | 5109 | 2656.26 | 1581 | 616.27 | 0 | 0.00 | 0 | 0.00 | 0 | 0.00 | 0 | 0.00 | 0 | 0 | 0 | 0 | 0 | 0 | 387 | 38.70 |
| ಚನ್ನರಾಯಪಟ್ಟಣ | ಬಾಗೂರು | 7 | 5760 | 2638.32 | 5935 | 2516.29 | 6454 | 3302.52 | 1205 | 535.41 | 0 | 0.00 | 0 | 0.00 | 1 | 7.00 | 2 | 14.00 | 0 | 0 | 0 | 0 | 0 | 0 | 652 | 65.20 |
| | ಒಟ್ಟು | 38 | 35928 | 17148.88 | 36187 | 16701.70 | 39688 | 20809.84 | 6181 | 2707.08 | 4 | 17.10 | 5 | 20.45 | 7 | 43.95 | 4 | 20.50 | 0 | 0.00 | 0 | 0.00 | 0 | 0.00 | 2639 | 263.90 |
| ಹಾಸನ | ದುದ್ದ | 11 | 8063 | 3153.90 | 6321 | 2664.98 | 7466 | 3702.56 | 1704 | 498.05 | 0 | 0 | 5 | 34.00 | 27 | 194.37 | 25 | 148.80 | | | | | | | 1988 | 198.80 |
| ಹಾಸನ | ಕಟ್ಟಾಯ | 7 | 2699 | 1089.03 | 2403 | 1065.54 | 2897 | 1377.5 | 378 | 112.19 | 0 | 0 | 96 | 59.60 | 3 | 22.87 | 0 | 0.00 | | | | | | | 423 | 42.30 |
| ಹಾಸನ | ಕಸಬಾ | 7 | 3460 | 1488.70 | 3218 | 1398.02 | 3490 | 1739.61 | 951 | 306.23 | 0 | 0 | 2 | 8.50 | 13 | 95.36 | 15 | 76.50 | | | | | | | 2029 | 202.90 |
| ಹಾಸನ | ಶಾಂತಿಗ್ರಾಮ | 9 | 6700 | 2506.71 | 5542 | 2337.24 | 6031 | 3307.66 | 1608 | 460.83 | 0 | 0 | 0 | 0.00 | 9 | 59.50 | 12 | 53.00 | | | | | | | 1200 | 120.00 |
| ಹಾಸನ | ಸಾಲಗಾಮೆ | 4 | 3719 | 1819.59 | 3403 | 1506.32 | 3570 | 1965.89 | 747 | 225.21 | 0 | 0 | 2 | 16.00 | 9 | 63.29 | 6 | 24.50 | | | | | | | 949 | 94.90 |
| | ಒಟ್ಟು | 38 | 24641 | 10057.93 | 20887 | 8972.10 | 23454 | 12093.22 | 5388 | 1602.51 | 0 | 0 | 105 | 118.10 | 61 | 435.39 | 58 | 302.80 | 0 | 0 | 0 | 0 | 0 | 0 | 6589 | 658.90 |
| ಹೊಳೆನರಸೀಪುರ | ಕಸಬಾ | 4 | 1132 | 467.32 | 1003 | 399.18 | 1038 | 441.23 | 473 | 141.98 | | | | | | | | | | | | | | | 0 | 0.00 |
| ಹೊಳೆನರಸೀಪುರ | ಹಳೇಕೋಟೆ | 7 | 3252 | 1338.99 | 3100 | 1237.73 | 3253 | 1617.94 | 1046 | 261.57 | | | 2 | 19.5 | | | | | | | | | | | 0 | 0.00 |
| ಹೊಳೆನರಸೀಪುರ | ಹಳ್ಳಿಮೈಸೂರು | 4 | 1069 | 385.17 | 1252 | 484.75 | 1089 | 440.13 | 624 | 124.75 | | | | | | | | | | | | | | | 0 | 0.00 |
| | ಒಟ್ಟು | 15 | 5453 | 2191.48 | 5355 | 2121.66 | 5380 | 2499.3 | 2143 | 528.3 | 0 | 0 | 2 | 19.5 | 0 | 0 | 0 | 0 | 0 | 0 | 0 | 0 | 0 | 0 | | 0.00 |
| ಸಕಲೇಶಪುರ | ಹಾನುಬಾಳು | 3 | 651 | 394.79 | 669 | 355.94 | 776 | 452.2 | 42 | 13.85 | | | | | | | 1 | 7.00 | | | | | | | | 0.00 |
| ಸಕಲೇಶಪುರ | ಹೆತ್ತೂರು | 3 | 875 | 549.63 | 999 | 587.24 | 1090 | 661.43 | 261 | 112.75 | | | | | | | | | | | | | | | 45 | 4.50 |
| ಸಕಲೇಶಪುರ | ಬೆಳಗೋಡು | 2 | 325 | 164.63 | 246 | 102.1 | 534 | 251.85 | 213 | 77.1 | | | | | | | | | | | | | | | | 0.00 |
| ಸಕಲೇಶಪುರ | ಯಸಳೂರು | 6 | 1505 | 822.71 | 1655 | 881.07 | 1662 | 952.69 | 125 | 61.55 | | | | | | | | | | | | | | | | 0.00 |
| ಸಕಲೇಶಪುರ | ಕಸಬಾ | 2 | 333 | 262.34 | 332 | 270.99 | 348 | 298.85 | | | | | | | | | | | | | | | | | 10 | 1.00 |
| | ಒಟ್ಟು | 16 | 3689 | 2194.1 | 3901 | 2197.34 | 4410 | 2617.02 | 641 | 265.25 | | | | | | | 1 | 7.00 | | | | | | | 55 | 5.50 |
| ಒಟ್ಟು | | 204 | 111931 | 49872.14 | 110609 | 49598.89 | 123180 | 62129.21 | 27284 | 9495.80 | 4 | 17.10 | 114 | 170.05 | 102 | 691.34 | 130 | 753.40 | 0 | 0.00 | 0 | 0.00 | 0 | 0.00 | 18834 | 1883.40 |